RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೮<br>**Volume 148** | ಬೆಂಗಳೂರು, ಗುರುವಾರ, ಮೇ ೩೦, ೨೦೧೩ (ಜ್ಯೇಷ್ಠ ೯, ಶಕ ವರ್ಷ ೧೯೩೫)<br>**Bangalore, Thursday, May 30, 2013 (Jyeishta 9, Shaka Varsha 1935)** | ಸಂಚಿಕೆ ೨೨<br>**Issue 22** |
|---|---|---|



## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕೃಷ್ಣಾನಾಯ್ಕ್, ಎ.ಎಸ್.ಐ. ತಿರುಮಣಿ ಪೊಲೀಸ್ ಠಾಣೆ, ಪಾವಗಡ ತಾಲ್ಲೂಕು, ಇವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಕುರಿತು ಅಂತಿಮ ಆದೇಶ

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ (4)/ಪನ್ನಿ/ಅಮಾನತ್ತು/13/2011 (ಓ.ಬಿ. ಸಂಖ್ಯೆ: 555/11), ದಿನಾಂಕ: 14-12-2011
2. ಮೇಲ್ಮನವಿ ಪ್ರಾಧಿಕಾರ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು (21)ಶಿಕ್ಷೆ/2012 (ಓ.ಬಿ. ಸಂಖ್ಯೆ: 68/2012-13), ದಿನಾಂಕ: 14-09-2012
3. ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ: 20-10-2012
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/46/2012-13, ದಿನಾಂಕ: 21-01-2013
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 203 ಸಿಎನ್‌ಎಸ್ 12, ದಿನಾಂಕ: 01-04-2013

**ಪ್ರಸ್ತಾವನೆ:**

ಶ್ರೀ ಕೃಷ್ಣಾನಾಯ್ಕ್, ಎ.ಎಸ್.ಐ. ಇವರು (ಇನ್ನು ಮುಂದೆ ಅರ್ಜಿದಾರರರೆಂದು ಕರೆಯಲ್ಪಡುವ) ಹಂದನಕೆರೆ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ, ಹಾಗೂ ಬೇಜವಾಬ್ದಾರಿತನ, ತೋರಿರುವ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7 ರಡಿಯಲ್ಲಿ ಶಿಸ್ತು ಕ್ರಮ ಜರುಗಿಸಲು ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ದಿನಾಂಕ: 28-06-2010ರಂದು ರಾತ್ರಿ ನಿಮ್ಮನ್ನು ಹಂದನಕೆರೆ ಪೊಲೀಸ್ ಠಾಣಾ ವ್ಯಾಪ್ತಿಯ ಗೋಪಾಲಪುರ ಗ್ರಾಮದ ಬಂದೋಬಸ್ತ್ ಕರ್ತವ್ಯಕ್ಕೆ ನೇಮಕ ಮಾಡಿದ್ದರೂ ಸಹ ನೀವು ನಿಮ್ಮ ನಿಯೋಜಿತ ಕರ್ತವ್ಯವನ್ನು ಮಾಡದೆ ನಿರ್ಲಕ್ಷಿಸಿ ರಾತ್ರಿ 6-30 ಗಂಟೆಗೆ ಗ್ರಾಮದ ಬಂದೋಬಸ್ತ್ ಕರ್ತವ್ಯವನ್ನು ಬಿಟ್ಟು ಹೋಗಿದ್ದರಿಂದ ಗ್ರಾಮದಲ್ಲಿ ಅಹಿತಕರ ಘಟನೆ ಸಂಭವಿಸಿದ್ದು ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಬೇಜವಾಬ್ದಾರಿತನ, ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 14-12-2011ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು

ತದನಂತರದ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಆರು ತಿಂಗಳ ಕಾಲ ಮುಂದೂಡಿದೆ ಹಾಗೂ ದಿನಾಂಕ: 01–07–2010 ರಿಂದ 25–01–2011ರ ವರೆಗಿನ ಅವರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 14–09–2012ರ ಆದೇಶದಲ್ಲಿ ದಿನಾಂಕ: 01–07–2010 ರಿಂದ 25–01–2011 ರವರೆಗೆ ಕಳೆದ ಅಮಾನತ್ತಿನ ಅವಧಿಯನ್ನು ಅವರ ಖಾತೆಯಲ್ಲಿರುವ ಯಾವುದಾದರೂ ರಜೆಯನ್ನಾಗಿ ಪರಿಗಣಿಸಲಾಗಿದೆ ಹಾಗೂ ಶಿಸ್ತು ಪ್ರಾಧಿಕಾರಿಗಳು ವಿಧಿಸಿದ್ದ ದಂಡನೆ ಆದೇಶವನ್ನು ಎತ್ತಿ ಹಿಡಿಯಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 117 ಪೊಸಿಅ 2012, ಬೆಂಗಳೂರು, ದಿನಾಂಕ: 24ನೇ ಏಪ್ರಿಲ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೃಷ್ಣನಾಯ್ಕ್, ಎ.ಎಸ್.ಐ. ತಿರುಮಣಿ ಪೊಲೀಸ್ ಠಾಣೆ, ಪಾವಗಡ ತಾಲ್ಲೂಕು, ಇವರ ಪರಿಷ್ಕರಣ ಮೇಲ್ಮನವಿಯ ಅರ್ಜಿಯನ್ನು ಭಾಗಶಃ ಪುರಸ್ಕರಿಸಿ, ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಮಾರ್ಪಡಿಸಿ, ದಂಡನಾದೇಶದ ದಿನಾಂಕದಿಂದ ಜಾರಿಗೆ ಬರುವಂತೆ ವಾಗ್ದಂಡನೆ (censure) ವಿಧಿಸಿ, ಮೇಲ್ಮನವಿ ಪ್ರಾಧಿಕಾರದ ಆದೇಶದಂತೆ ದಿನಾಂಕ: 01–07–2010 ರಿಂದ 25–01–2011ರ ವರೆಗಿನ ಅಮಾನತ್ತಿನ ಅವಧಿಯನ್ನು ಅವರ ಖಾತೆಯಲ್ಲಿರುವ ರಜೆಯನ್ನಾಗಿ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**P.R. 544**

**SC - 30**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಸಪ್ತಗಿರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಮತ್ತು ಸಂಶೋಧನಾ ಕೇಂದ್ರ, ಬೆಂಗಳೂರು ಈ ಸಂಸ್ಥೆಗೆ ಶವ ಪರೀಕ್ಷೆ ನಡೆಸಲು ಅನುಮತಿ ನೀಡುವ ಬಗ್ಗೆ

**ಓದಲಾಗಿದೆ:**

1. ಪ್ರಾಂಶುಪಾಲರು, ಸಪ್ತಗಿರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಮತ್ತು ಸಂಶೋಧನಾ ಕೇಂದ್ರ, ಬೆಂಗಳೂರು ಇವರ ಪತ್ರ ಸಂಖ್ಯೆ: SIMS/FM/COR/07/2013, ದಿನಾಂಕ: 28–01–2013
2. ನಿರ್ದೇಶಕರು, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ವೈಶಿನಿ/ ಎಂಇಎಸ್(2)/37/2012–13, ದಿನಾಂಕ: 19–01–2013
3. ಅಧಿಸೂಚನೆ ಸಂಖ್ಯೆ: ಆಕುಕ 61 ಎಂಎಸ್ಎಫ್ 2013, ದಿನಾಂಕ: 21–03–2013
4. ಪ್ರಾಂಶುಪಾಲರು, ಸಪ್ತಗಿರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಮತ್ತು ಸಂಶೋಧನಾ ಕೇಂದ್ರ ಬೆಂಗಳೂರು ಇವರ ಪತ್ರ ಸಂಖ್ಯೆ: SIMS/PRI/MLC/16/2012-13, ದಿನಾಂಕ: 18–04–2013

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಪ್ರಾಂಶುಪಾಲರು, ಸಪ್ತಗಿರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಮತ್ತು ಸಂಶೋಧನಾ ಕೇಂದ್ರ, ಬೆಂಗಳೂರು ಇವರು ತಮ್ಮ ಸಂಸ್ಥೆಯಲ್ಲಿ medico-legal autopsies ಅನ್ನು ನಡೆಸಲು ಅನುಮತಿ ಕೋರಿ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯಕ್ಕೆ ಅರ್ಜಿ ಸಲ್ಲಿಸಲಾಗಿತ್ತೆಂದು, ಈ ಸಂಬಂಧಿತವಾಗಿ ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯವು ಡಾ॥ ದೇವದಾಸ್, ಪ್ರಾಧ್ಯಾಪಕರು ಹಾಗೂ ವಿಭಾಗದ ಮುಖ್ಯಸ್ಥರು, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರನ್ನು ತಪಾಸಣೆಗಾಗಿ ನೇಮಿಸಿದ್ದು, ಸದರಿಯವರು ತಮ್ಮ ಸಂಸ್ಥೆಯಲ್ಲಿನ ಶವಗಳ ಮರಣೋತ್ತರ ಪರೀಕ್ಷೆಗೆ ಮಾತ್ರ ಅನುಮತಿ ನೀಡಬಹುದಾಗಿದೆಯೆಂದು ಅಭಿಪ್ರಾಯ ನೀಡಿರುವುದಾಗಿ ತಿಳಿಸುತ್ತಾ, ಪ್ರಸ್ತುತ ತಮ್ಮ ಸಂಸ್ಥೆಯಲ್ಲಿ ರಸ್ತೆ ಅಪಘಾತದಲ್ಲಿ ಹಾಗೂ ವಿಷ ಸೇವನೆಯಿಂದ ಮರಣ ಹೊಂದಿದ ಸುಮಾರು 10 medio legal autopsies ಅನ್ನು ಭಾರತೀಯ ವೈದ್ಯಕೀಯ ಪರಿಷತ್‌ನ ನಿಯಮಗಳನ್ವಯ ಮಾಡಲಾಗುತ್ತಿದ್ದು, ಇದರಿಂದ ವಿದ್ಯಾರ್ಥಿಗಳ ಬೋಧನೆಗೆ ಇನ್ನಿತರ ಕಾರಣಗಳಿಂದ ಮೃತಪಟ್ಟ ಶವಗಳ ಕೊರತೆಯುಂಟಾಗಿದ್ದು, ನೀರಿನಲ್ಲಿ ಮುಳುಗಿ ಮೃತಪಟ್ಟ ನರಘಾತಕ ಚಟುವಟಿಕೆಯಿಂದ ಮರಣ ಹೊಂದಿದ ಮತ್ತು ನೇಣು ಬಿಗಿದು ಮೃತಪಟ್ಟ ಶವಗಳ autopsy ಅನ್ನು ತಮ್ಮ ಆಸ್ಪತ್ರೆಯಲ್ಲಿ ಕೈಗೊಳ್ಳಲು ಈ ಶವಗಳ ಲಭ್ಯತೆ ಇಲ್ಲದೆ, ತಮ್ಮ ಸಂಸ್ಥೆಯಲ್ಲಿ ಕೇವಲ ರಸ್ತೆ ಅಪಘಾತದಲ್ಲಿ ಮೃತಪಟ್ಟ ಹಾಗೂ ವಿಷ ಸೇವನೆಯಿಂದ ಮೃತಪಟ್ಟ ಶವಗಳ autopsy ಅನ್ನು ಕೈಗೊಳ್ಳಲಾಗುತ್ತಿದ್ದು, ವಿದ್ಯಾರ್ಥಿಗಳ ಬೋಧನೆಗೆ ತೊಂದರೆಯಾಗುತ್ತಿರುವುದರಿಂದ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಎಲ್ಲಾ ತರಹದ ಶವಗಳ medico-legal autopsy ನಡೆಸಲು ಅನುಮತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು, ಬೆಂಗಳೂರು ಇವರು ಸಪ್ತಗಿರಿ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇಲ್ಲಿಗೆ ಡಾ॥ ಪಿ.ಕೆ. ದೇವದಾಸ್, ಪ್ರಾಧ್ಯಾಪಕರು ಹಾಗೂ ವಿಭಾಗದ ಮುಖ್ಯಸ್ಥರು, ಫೊರೆನ್ಸಿಕ್ಸ್ ಮೆಡಿಸಿನ್ ವಿಭಾಗ, ಬೆಂಗಳೂರು ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರನ್ನು ತಪಾಸಣೆ ಮಾಡಲು ನಿಯೋಜಿಸಲಾಗಿದ್ದು, ಸದರಿಯವರು ತಪಾಸಣೆಗಾಗಿ ಸಪ್ತಗಿರಿ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಕೇಂದ್ರಕ್ಕೆ ದಿನಾಂಕ: 15–12–2012ರಂದು ಭೇಟಿ ನೀಡಿ ಈ ಸಂಸ್ಥೆಗೆ ಮೆಡಿಕೋ ಲೀಗಲ್ ಅಟಾಪ್ಸಿ ಅಧ್ಯಯನವನ್ನು ಹೊಸದಾಗಿ ಪ್ರಾರಂಭಿಸಲು MCI ನಿಯಮಗಳ ಪ್ರಕಾರ ಸಂಸ್ಥೆಯ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಹೊಂದಿರುವುದಾಗಿ ಅಂದರೆ, ಅಗತ್ಯವಾದ ಕಟ್ಟಡ, ಬೋಧಕ ಸಿಬ್ಬಂದಿ, ಅಟಾಪ್ಸಿ ಟೇಬಲ್, ವಿಭಾಗದ ಪ್ರಯೋಗಶಾಲೆ, ಸಂಶೋಧನಾ ಪ್ರಯೋಗಶಾಲೆ, ಸಂಪೂರ್ಣವಾಗಿ ಪೀಠೋಪಕರಣಗಳೊಂದಿಗೆ ಅಳವಡಿಸಿಕೊಂಡಿರುತ್ತಾರೆಂದು ಹಾಗೂ ಈ ಮಹಾವಿದ್ಯಾಲಯದಲ್ಲಿ ಇಬ್ಬರು ಬೋಧಕ ಸಿಬ್ಬಂದಿ ಮಾತ್ರ ಇದ್ದು, ಅಟಾಪ್ಸಿಯನ್ನು ಅಲ್ಲಿನ ಆಸ್ಪತ್ರೆಯಲ್ಲಿ ಮರಣ ಹೊಂದಿದವರಿಗೆ ಮಾತ್ರ ಸೀಮಿತವಾಗಿರಬೇಕೆಂಬ ಅಭಿಪ್ರಾಯವನ್ನು ನೀಡಿರುವುದಾಗಿ ತಿಳಿಸುತ್ತಾ, ತಪಾಸಣಾಧಿಕಾರಿಗಳ ಅಭಿಪ್ರಾಯದಂತೆ ಸಪ್ತಗಿರಿ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆಗೆ ಮೆಡಿಕೋ ಲೀಗಲ್ ಅಟಾಪ್ಸಿ ಅಧ್ಯಯನ ಪ್ರಾರಂಭಿಸುವ ಬಗ್ಗೆ ಮುಂದಿನ ಸೂಕ್ತ ಕ್ರಮಕ್ಕಾಗಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರಮಸಂಖ್ಯೆ (3)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಕರ್ನಾಟಕ ಅನಾಟಮಿ ಕಾಯ್ದೆ, 1957ರ 2(1)(ಎ)ರ ಪ್ರಕಾರ ಸಪ್ತಗಿರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಮತ್ತು ಸಂಶೋಧನಾ ಕೇಂದ್ರ, ಬೆಂಗಳೂರು ಇದನ್ನು ಈ ಕಾಯ್ದೆಯ ಉದ್ದೇಶಕ್ಕಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಒಂದು ಅನುಮೋದಿತ ಸಂಸ್ಥೆಯನ್ನಾಗಿ ಘೋಷಿಸಲಾಗಿದೆ.

ಮೇಲೆ ಕ್ರಮಸಂಖ್ಯೆ (4)ರಲ್ಲಿ ಓದಲಾದ ಪತ್ರದಲ್ಲಿ ತಮ್ಮ ಸಂಸ್ಥೆಯಲ್ಲಿ ಕೈಗೊಳ್ಳಲಾಗುವ medico-legal autopsy ಗೆ ಸಂಬಂಧಿಸಿದಂತೆ ಸರ್ಕಾರವು ಅಧಿಸೂಚನೆ ಸಂಖ್ಯೆ: ಆಕುಕ 61 ಎಂಎಸ್‌ಎಫ್ 2013, ದಿನಾಂಕ: 21–03–2013ರಲ್ಲಿ ಕರ್ನಾಟಕ ಅನಾಟಮಿ ಕಾಯ್ದೆ, 1957ರ ಕಲಂ 2(1)(ಎ)ರ ಪ್ರಕಾರ ನೀಡಿರುವ ಅನುಮತಿಯು ಬೇರೆಯದೇ ಉದ್ದೇಶವಾಗಿದ್ದು, medico-legal ಅಟಾಪ್ಸಿಯನ್ನು ಕೈಗೊಳ್ಳುವ ಸಂಬಂಧ ಇತರೆ ಸಂಸ್ಥೆಯವರಿಗೆ ಅನುಮತಿ ನೀಡಿ ಆದೇಶಿಸಲಾಗಿರುವಂತೆ, ತಮ್ಮ ಸಂಸ್ಥೆಯಲ್ಲಿಯೂ ಅಟಾಪ್ಸಿಯನ್ನು ಕೈಗೊಳ್ಳಲು ಅನುಮತಿ ನೀಡಿ ಆದೇಶ ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕುಷವಾಗಿ ಪರಿಶೀಲಿಸಿದ ನಂತರ, ಅಧಿಸೂಚನೆ ಸಂಖ್ಯೆ: ಆಕುಕ 61 ಎಂಎಸ್‌ಎಫ್ 2013, ದಿನಾಂಕ: 21–03–2013 ಅನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆದು, ಬೆಂಗಳೂರಿನ ಸಪ್ತಗಿರಿ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆಯ ವಿದ್ಯಾರ್ಥಿಗಳ ಪ್ರಾಯೋಗಿಕ ಪರೀಕ್ಷೆಗಾಗಿ ಸದರಿ ಕಾಲೇಜಿನಲ್ಲಿ ಮೃತಪಟ್ಟ ಶವಗಳ ಮರಣೋತ್ತರ ಶವ ಪರೀಕ್ಷೆಯನ್ನು ನಡೆಸಲು ಅನುಮತಿ ನೀಡಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 61 ಎಂಎಎಸ್‌ಎಫ್ 2013, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರಿನ ಸಪ್ತಗಿರಿ ವೈದ್ಯಕೀಯ ಮಹಾವಿದ್ಯಾಲಯ ಮತ್ತು ಸಂಶೋಧನಾ ಸಂಸ್ಥೆಯ ವಿದ್ಯಾರ್ಥಿಗಳ ಪ್ರಾಯೋಗಿಕ ಪರೀಕ್ಷೆಗಾಗಿ ಸದರಿ ಕಾಲೇಜಿನಲ್ಲಿ ಮೃತಪಟ್ಟ ಶವಗಳ ಮರಣೋತ್ತರ ಶವ ಪರೀಕ್ಷೆಯನ್ನು ನಡೆಸಲು ಈ ಕೆಳಕಂಡ ಷರತ್ತುಗಳೊಂದಿಗೆ ಅನುಮತಿ ನೀಡಿ ಆದೇಶಿಸಿದೆ.

1) ಮರಣೋತ್ತರ ಪರೀಕ್ಷೆಗಾಗಿ ಯಾವುದೇ ಶುಲ್ಕವನ್ನು ಮೃತರ ಕುಟುಂಬದಿಂದ ಅಥವಾ ಬಂಧುಬಾಂಧವರಿಂದ ವಸೂಲಿ ಮಾಡಬಾರದು.
2) ಮರಣೋತ್ತರ ಶವ ಪರೀಕ್ಷೆಯ ನಂತರ ರಾಸಾಯನಿಕ ಪರೀಕ್ಷೆಗಳಿಗಾಗಿ ಆಯ್ದ ಭಾಗಗಳನ್ನು ಆರಕ್ಷಕರು ಸೂಚಿಸಿದ ಸ್ಥಳದಲ್ಲಿಯೇ ನಿರ್ವಹಿಸುವುದು.
3) ಕಾಲಕಾಲಕ್ಕೆ ಸರ್ಕಾರವು ನಿಗದಿಪಡಿಸಿದ ಆಸ್ಪತ್ರೆಯ ಕರ್ತವ್ಯದ ಅವಧಿಯಲ್ಲಿ ಆರಕ್ಷಕರಿಂದ ಪಂಚನಾಮೆ ನಡೆಸಿ ಮರಣೋತ್ತರ ಪರೀಕ್ಷೆ ನಡೆಸುವುದು.
4) ಮರಣ ಕಾರಣ ಇತ್ಯಾದಿ ಮರಣೋತ್ತರ ಪರೀಕ್ಷಾ ವರದಿಗಳನ್ನು ನಿಗದಿತ ಸಮಯದೊಳಗೆ ತಯಾರಿಸಿ, ಸಂಬಂಧಪಟ್ಟ ಆರಕ್ಷಕ ಠಾಣೆಗೆ ಸಲ್ಲಿಸುವುದು.
5) ಮೆಡಿಕೋ ಲೀಗಲ್ ತಜ್ಞರ (expert opinion) ಪ್ರಮಾಣ ಪತ್ರವನ್ನು ಸದರಿ ಮಹಾವಿದ್ಯಾಲಯದ ವಿಧಿ ವೈದ್ಯಶಾಸ್ತ್ರ ಪ್ರಾಧ್ಯಾಪಕರ ಹುದ್ದೆಯನ್ನು ಹೊಂದಿದವರು ಮಾತ್ರ ನೀಡುವುದು.
6) ಮರಣೋತ್ತರ ಶವ ಪರೀಕ್ಷೆಗೆ ಆಗುವ ಆರ್ಥಿಕ ಹೊರೆಯನ್ನು ಸರ್ಕಾರದಿಂದ ಭರಿಸಲಾಗುವುದಿಲ್ಲ.
7) ಸಾಕ್ಷ್ಯಾಧಾರ ಒದಗಿಸುವ ಸಲುವಾಗಿ ನ್ಯಾಯಾಲಯಗಳಿಗೆ ಹಾಜರಾಗುವ ಸಂಬಂಧ ಯಾವುದೇ ಭತ್ಯೆಯನ್ನು ಸರ್ಕಾರ ಭರಿಸುವುದಿಲ್ಲ.
8) ಶವ ಪರೀಕ್ಷೆ ನಡೆಸಿದ ತಜ್ಞರು ಉದ್ಯೋಗದಲ್ಲಿ ಮುಂದುವರೆಯದಿದ್ದರೂ ಸಹ ನ್ಯಾಯಾಲಯಕ್ಕೆ ಸಾಕ್ಷ್ಯಾಧಾರ ನೀಡಲು ಹಾಜರುಪಡಿಸುವ ಜವಾಬ್ದಾರಿ ಸದರಿ ವೈದ್ಯಕೀಯ ಮಹಾವಿದ್ಯಾಲಯದ್ದಾಗಿರುತ್ತದೆ.

9) ಮೆಡಿಕೋ ಲೀಗಲ್ ಪ್ರಕರಣಗಳಲ್ಲಿ ಕಾಯ್ದಿರಿಸಿದ ವಸ್ತುಗಳನ್ನು ವಿಧಿ ವೈದ್ಯಶಾಸ್ತ್ರ ವಿಭಾಗದ ಪ್ರಾಧ್ಯಾಪಕರು ವಿಶ್ಲೇಷಿಸಿ ಅಭಿಪ್ರಾಯ ನೀಡುವ ಸಲುವಾಗಿ ಅಗತ್ಯವಾದ ಪ್ರಯೋಗಾಲಯವನ್ನು ಸ್ಥಾಪಿಸಿ, ಅದಕ್ಕೆ ರಾಷ್ಟ್ರೀಯ ಅಕ್ರಿಡೇಷನ್ ಮಾನ್ಯತೆಯನ್ನು ಹೊಂದತಕ್ಕದ್ದು.

ಮೇಲ್ಕಂಡ ಷರತ್ತು ಮತ್ತು ನಿಬಂಧನೆಗಳಲ್ಲದೆ ಸರ್ಕಾರ/ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ/ವೈದ್ಯಕೀಯ ಶಿಕ್ಷಣ ನಿರ್ದೇಶಕರು ಕಾಲಕಾಲಕ್ಕೆ ಹೊರಡಿಸುವ ಸ್ಥಾಯಿ ಆದೇಶಗಳನ್ನು ಸೂಚನೆಗಳನ್ನು ಪಾಲಿಸತಕ್ಕದ್ದು.

ಈ ಆದೇಶದಿಂದಾಗಿ ಈ ಬಗ್ಗೆ ಈಗಾಗಲೇ ಹೊರಡಿಸಲಾಗಿರುವ ಅಧಿಸೂಚನೆ ಸಂಖ್ಯೆ : ಆಕುಕ 61 ಎಂಎಸ್‌ಎಫ್ 2013, ದಿನಾಂಕ: 21–03–2013 ಅನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಸಾಯಿಬಾಬಾ,**

ಸರ್ಕಾರದ ಅಧೀನ ಕಾರ್ಯದರ್ಶಿ,

**P.R. 545** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. (ವೈದ್ಯಕೀಯ ಶಿಕ್ಷಣ)

## ಶಿಕ್ಷಣ ಸಚಿವಾಲಯ

**ವಿಷಯ:** ಗದಗ್ ಜಿಲ್ಲೆಯ, ರೋಣ ತಾಲ್ಲೂಕಿನ ಶ್ರೀ ಅಂದಾನಪ್ಪ ಜ್ಞಾನಪ್ಪ ದೊಡ್ಡಮೇಟಿ ಪ್ರೌಢಶಾಲೆ (ಎಸ್.ಎ.ಜೆ.ಡಿ.) ಇದನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಆಯುಕ್ತರ ಕಛೇರಿ, ಧಾರವಾಡ ಇವರ ಪತ್ರ ಸಂಖ್ಯೆ ಜಿ6/ಶಾಶಿಅ/ಹಸ್ತಾಂತರ/21/2009–10/1306, ದಿನಾಂಕ 24–07–2009 ಮತ್ತು ದಿನಾಂಕ : 15.09.2010.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಆಯುಕ್ತರ ಕಛೇರಿ, ಧಾರವಾಡ ಇವರು ಹರಿಜನ ಸೇವಾ ವಿದ್ಯಾವರ್ಧಕ ಸಂಘ, ಜಕ್ಕಲಿ, ರೋಣ ತಾಲ್ಲೂಕು (ಪ.ಜಾ./ಪ.ಪಂ. ವರ್ಗದ ಆಡಳಿತ ಮಂಡಳಿ) ಈ ಸಂಸ್ಥೆಯ ವತಿಯಿಂದ ನಡೆಯುವ ಶ್ರೀ ಅಂದಾನಪ್ಪ ಜ್ಞಾನಪ್ಪ ದೊಡ್ಡಮೇಟಿ (ಎಸ್.ಎ.ಜೆ.ಡಿ.) ಪ್ರೌಢಶಾಲೆ, ಜಕ್ಕಲಿ, ರೋಣ ತಾಲ್ಲೂಕು, ಗದಗ ಜಿಲ್ಲೆ ಈ ಶಾಲೆಯನ್ನು ಸರ್ಕಾರಕ್ಕೆ ಹಸ್ತಾಂತರಿಸುವುದರ ಬಗ್ಗೆ ತಿಳಿಸುತ್ತಾ, ಸದರಿ ಪ್ರೌಢಶಾಲೆಯನ್ನು ಪ್ರಾರಂಭಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಆದೇಶ ಸಂಖ್ಯೆ ಇ7 (ಹೆಚ್) ಓಎನ್‌ಎಸ್–48/82–83, ದಿನಾಂಕ 29–06–1983ರ ಪ್ರಕಾರ 1983–84ನೇ ಸಾಲಿನಿಂದ ಪ್ರಾರಂಭಿಸಲು ಅನುಮತಿ ನೀಡಲಾಗಿದೆ. ಸಹ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಳಗಾವಿ ಇವರ ಆದೇಶ ಸಂಖ್ಯೆ : ಎಸ್2–2380–ಮನ್ನಣೆ–105–83–84, ದಿನಾಂಕ 13–05–85ರ ಪ್ರಕಾರ ಸದರಿ ಶಾಲೆಗೆ ಪ್ರಥಮ ಮಾನ್ಯತೆ ನೀಡಿರುತ್ತಾರೆ. ಹಾಗೂ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರ ಆದೇಶ ಸಂಖ್ಯೆ ಜಿ8– ಪ್ರಥಮ ಅನುದಾನ/142/85–86, ದಿನಾಂಕ 24–03–1986ರ ಪ್ರಕಾರ ಮುಂಗಡ ಅನುದಾನ ಯೋಜನೆಗೆ ಒಳಪಡಿಸಿದ್ದಾರೆ.

ಸದರಿ ಶಾಲೆಯು ಸ್ವಂತ ಕಟ್ಟಡ, ಆಟದ ಮೈದಾನ ಹೊಂದಿದ್ದು, 2009–10ನೇ ಶೈಕ್ಷಣಿಕ ಸಾಲಿನಲ್ಲಿ ಉತ್ತಮ ಮಕ್ಕಳ ಸಂಖ್ಯೆ ಹೊಂದಿರುವುದಾಗಿ ನಿರ್ದೇಶಕರು ತಿಳಿಸಿರುತ್ತಾರೆ. ಸದರಿ ಸಂಸ್ಥೆಯ ನೋಂದಣಿ ಮತ್ತು 2006–07ನೇ ಸಾಲಿನ ಕಾರ್ಯಕಾರಿ ಮಂಡಳಿ ಸದಸ್ಯರ ಯಾದಿ ಹಾಗೂ ಈ ಶಾಲೆಯ ಮಾನ್ಯತೆ ನವೀಕರಣವನ್ನು 2006–07 ರವರೆಗೆ ಪಡೆದಿರುವುದಾಗಿಯೂ ಹಾಗೂ ಈ ಶಾಲೆಯ ಕಟ್ಟಡದ ನಕ್ಷೆ ಮತ್ತು ಪೋಟೋ ಪ್ರತಿಯೊಂದಿಗೆ ಸಲ್ಲಿಸಿರುತ್ತಾರೆ. ಸದರಿ ಶಾಲೆಯಲ್ಲಿ 01 ಮುಖ್ಯೋಪಾಧ್ಯಾಯರು, 06 ಸಹ ಶಿಕ್ಷಕರು, 01 ದ್ವಿತೀಯ ದರ್ಜೆ ಸಹಾಯಕ ಮತ್ತು 02 ಜವಾನ, 01 ಅಟೆಂಡರ್ ಕಾರ್ಯನಿರ್ವಹಿಸುತ್ತಿದ್ದು, ಅದರಲ್ಲಿ ಅಟೆಂಡರ್ ಹುದ್ದೆಗೆ ಅನುದಾನರಹಿತ ಅನುಮೋದನೆಯಾಗಿರುತ್ತದೆಂದು, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗದಗ ಇವರು ವರದಿಸಿದ್ದಾರೆ.

**ಸದರಿ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವಂತೆ ಶ್ರೀ ಅಂದಾನಪ್ಪ ಜ್ಞಾನಪ್ಪ ದೊಡ್ಡಮೇಟಿ (ಎಸ್.ಎ.ಜೆ.ಡಿ.) ಪ್ರೌಢಶಾಲೆ, ಜಕ್ಕಲಿ, ರೋಣ ತಾಲ್ಲೂಕು ಗದಗ ಜಿಲ್ಲೆ ಈ ಪ್ರೌಢಶಾಲೆಯ ಚರಾಸ್ತಿಗಳು ಈ ಕೆಳಕಂಡಂತಿವೆ :–**

| ಕ್ರಮ ಸಂಖ್ಯೆ | ಚರಾಸ್ತಿ |
|---|---|
| 01 | 56 ಕಟ್ಟಿಗೆ ಡೆಸ್ಕುಗಳು |
| 02 | 08 ಕಬ್ಬಿಣದ ಡೆಸ್ಕುಗಳು |
| 03 | 07 ಟೇಬಲುಗಳು |
| 04 | 04 ಕಟ್ಟಿಗೆಯ ಕುರ್ಚಿಗಳು |
| 05 | 10 ಕಬ್ಬಿಣದ ಕುರ್ಚಿಗಳು |
| 06 | 03 ಕಟ್ಟಿಗೆಯ ಕಪಾಟುಗಳು |

| ಕ್ರಮ ಸಂಖ್ಯೆ | ಚರಾಸ್ತಿ |
|---|---|
| 07 | 04 ಕಬ್ಬಿಣದ ಕಪಾಟುಗಳು |
| 08 | 03 ಪ್ಲಾಸ್ಟಿಕ್ ಕುರ್ಚಿಗಳು |
| 09 | 04 ಕಟ್ಟಿಗೆ ಸ್ಟೂಲುಗಳು |
| 10 | 03 ಗಡಿಯಾರ |
| 11 | 03 ನೀರಿನ ಟ್ಯಾಂಕಿಗಳು |
| 12 | 01 ಕಟ್ಟಿಗೆಯ ಬಾಕುಗಳು |
| 13 | 01 ಕಬ್ಬಿಣದ ಟ್ರಂಕ್ |
| 14 | 04 ಪ್ಲಾಸ್ಟಿಕ್ ಕೊಡ |
| 15 | 01 ಕಂಚಿನ ಘಂಟೆ |

ಶ್ರೀ ಅಂದಾನಪ್ಪ ಜ್ಞಾನಪ್ಪ ದೊಡ್ಡಮೇಟಿ (ಎಸ್.ಎ.ಜೆ.ಡಿ.) ಪ್ರೌಢಶಾಲೆ, ಜಕ್ಕಲಿ, ರೋಣ ತಾಲ್ಲೂಕು ಗದಗ ಜಿಲ್ಲೆ ಈ ಪ್ರೌಢಶಾಲೆಯ ಸ್ಥಿರಾಸ್ತಿ ವಿವರ ಈ ಕೆಳಕಂಡಂತಿವೆ :–

| ಕ್ರಮ ಸಂಖ್ಯೆ | ಸ್ಥಿರಾಸ್ತಿ |
|---|---|
| 01 | ಎರಡು ಎಕರೆ ಭೂಮಿ ಶಾಲಾ ಕಟ್ಟಡ ಮತ್ತು ಆಟದ ಮೈದಾನ |

ಶ್ರೀ ಅಂದಾನಪ್ಪ ಜ್ಞಾನಪ್ಪ ದೊಡ್ಡಮೇಟಿ (ಎಸ್.ಎ.ಜೆ.ಡಿ.) ಪ್ರೌಢಶಾಲೆ, ಜಕ್ಕಲಿ, ರೋಣ ತಾಲ್ಲೂಕು ಗದಗ ಜಿಲ್ಲೆ ಈ ಪ್ರೌಢಶಾಲೆಯ ಬೋಧಕ ಮತ್ತು ಬೋಧಕೇತರ ವರ್ಗದ ಸಿಬ್ಬಂದಿಯವರ ವಿವರ ಈ ಕೆಳಕಂಡಂತಿವೆ :–

| ಕ್ರಮ ಸಂಖ್ಯೆ | ಸಿಬ್ಬಂದಿ ಹೆಸರು ಶ್ರೀ/ಶ್ರೀಮತಿ | ಪದನಾಮ |
|---|---|---|
| 01 | ಮರುತೆಮಪ್ಪ ಯಮನವ್ವ ಹಳೇಮನಿ | ಮುಖ್ಯೋಪಾಧ್ಯಾಯರು |
| 02 | ಮಲ್ಲಪ್ಪ ಕಳಕಪ್ಪ ಧರ್ಮಾಯತ | ಸಹ ಶಿಕ್ಷಕರು (ಕನ್ನಡ) |
| 03 | ರಾಮಪ್ಪ ಗುರುಬಸಪ್ಪ ಸೊಟಬಸಪ್ಪನವರ | ಸಹ ಶಿಕ್ಷಕರು |
| 04 | ಶಿವಪ್ಪ ಬಸಪ್ಪ ಗುಳಗಣ್ಣವರ | ಸಹ ಶಿಕ್ಷಕರು |
| 05 | ಈಶ್ವರಪ್ಪ ಮಲ್ಲೇಶಪ್ಪ ಹೂಗಾರ | ಸಹ ಶಿಕ್ಷಕರು (ಹಿಂದಿ) |
| 06 | ಸುರೇಶಬಾಬು ರಾಮಪ್ಪ ಬಾಗಲಿ | ಕ್ರಾಫ್ಟ್ ಶಿಕ್ಷಕರು |
| 07 | ಬಸಪ್ಪ ವೀರಪ್ಪ ಬಳಿಗೇರ | ದೈಹಿಕ ಶಿಕ್ಷಣ ಶಿಕ್ಷಕರು |
| 08 | ನಿಜಲಿಂಗಪ್ಪ ಬಸಪ್ಪ ಹಿರೇಮನಿ | ದ್ವಿತೀಯ ದರ್ಜೆ ಸಹಾಯಕರು |
| 09 | ಅಯ್ಯಪ್ಪ ಹನುಮಪ್ಪ ತಿಲಗರ | ಅಟೆಂಡರ್ |
| 10 | ರೇವಣೆಪ್ಪ ಹನುಮಪ್ಪ ಮಾದರ | ಜವಾನ–ವ–ಕಾವಲುಗಾರ |
| 11 | ಹನುಮಪ್ಪ ಯಲ್ಲಪ್ಪ ಮಣ್ಣೊಡ್ಡರ | ಜವಾನ |

ಸದರಿ ಶಾಲೆಯ ಆಡಳಿತ ಮಂಡಳಿಯು ಠರಾವು ನಂ–3, ದಿನಾಂಕ 25–11–2008ರ ಪ್ರಕಾರ ಹರಿಜನ ಸೇವಾ ವಿದ್ಯಾವರ್ಧಕ ಸಂಘ, ಜಕ್ಕಲಿ, ರೋಣ ತಾಲ್ಲೂಕು, ಈ ಸಂಸ್ಥೆಯಿಂದ ನಡೆಯುತ್ತಿರುವ ಎಸ್.ಎ.ಜೆ.ಡಿ. ಪ್ರೌಢಶಾಲೆ ಜಕ್ಕಲಿ, ರೋಣ ತಾಲ್ಲೂಕು ಈ ಪ್ರೌಢಶಾಲೆಯನ್ನು ಶ್ರೀ ಅಂದಾನಪ್ಪ ಜ್ಞಾನಪ್ಪ ದೊಡ್ಡಮೇಟಿ ಸರ್ಕಾರಿ ಪ್ರೌಢಶಾಲೆ ಎಂಬ ನಾಮಕರಣದೊಂದಿಗೆ, ಶಾಲಾ ಸಿಬ್ಬಂದಿ ವರ್ಗದ ಹಾಗೂ ಸಂಸ್ಥೆಯ ಆಸ್ತಿಯೊಂದಿಗೆ ಸರ್ಕಾರಕ್ಕೆ ಬಿಟ್ಟುಕೊಡಲು ಠರಾವು ಮಾಡಿದ್ದು ಮತ್ತು ರೂ. 50–00ರ ಛಾಪಾ ಕಾಗದದ ಮೇಲೆ ಒಪ್ಪಿಗೆ ಪತ್ರ ನೀಡಿರುತ್ತಾರೆಂದು ತಿಳಿಸುತ್ತಾ, ಕರ್ನಾಟಕ ಶಿಕ್ಷಣ ಕಾಯಿದೆ 1983 ರಲ್ಲಿ ಖಾಸಗಿ ಶಾಲೆಗಳನ್ನು ಸರ್ಕಾರ ವಹಿಸಿಕೊಳ್ಳುವ ಬಗ್ಗೆ ಯಾವುದೇ ನಿಯಮಾವಳಿಗಳಿಲ್ಲ. ಆದ್ದರಿಂದ ಈ ಕುರಿತು ಸರ್ಕಾರದ ಹಂತದಲ್ಲಿ ಸೂಕ್ತ ತೀರ್ಮಾನ ಕೈಗೊಳ್ಳಬಹುದೆಂದು ತಿಳಿಸಿದ್ದಾರೆ.

ಮೇಲೆ ತಿಳಿಸಿದ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಆಯುಕ್ತರ ಕಛೇರಿ, ಧಾರವಾಡ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 360 ಎಸ್‌ಓಹೆಚ್ 2012, ಬೆಂಗಳೂರು, ದಿನಾಂಕ : 23ನೇ ಜನವರಿ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹರಿಜನ ಸೇವಾ ವಿದ್ಯಾವರ್ಧಕ ಸಂಘ, ಜಕ್ಕಲಿ, ರೋಣ ತಾಲ್ಲೂಕು (ಪ.ಜಾ./ಪ.ಪಂ. ವರ್ಗದ ಆಡಳಿತ ಮಂಡಳಿ) ಈ ಸಂಸ್ಥೆಯ ವತಿಯಿಂದ ನಡೆಯುವ ಶ್ರೀ ಅಂದಾನಪ್ಪ ಜ್ಞಾನಪ್ಪ ದೊಡ್ಡಮೇಟಿ (ಎಸ್.ಎ.ಜೆ.ಡಿ.) ಅನುದಾನಿತ ಪ್ರೌಢಶಾಲೆ, ಜಕ್ಕಲಿ, ರೋಣ ತಾಲ್ಲೂಕು, ಗದಗ ಜಿಲ್ಲೆ ಈ ಪ್ರೌಢಶಾಲೆಯನ್ನು ಶ್ರೀ ಅಂದಾನಪ್ಪ ಜ್ಞಾನಪ್ಪ ದೊಡ್ಡಮೇಟಿ ಸರ್ಕಾರಿ ಪ್ರೌಢಶಾಲೆ, ಎಂಬ ನಾಮಕರಣದೊಂದಿಗೆ ಈ ಶಾಲೆಯನ್ನು ಶಾಲಾ ಸಿಬ್ಬಂದಿ ವರ್ಗ ಹಾಗೂ ಸಂಸ್ಥೆಯ ಚರ ಮತ್ತು ಸ್ಥಿರ ಆಸ್ತಿಯೊಂದಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ವಶಕ್ಕೆ ತೆಗೆದುಕೊಂಡು ಆದೇಶ ಹೊರಡಿಸಲಾಗಿದೆ. ಇದರ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರಿಗೆ ಸೂಚಿಸಿದೆ.

ಇಲ್ಲಿನ ಅನುದಾನಿತ ಸಿಬ್ಬಂದಿಗಳ ಸೇವೆಯನ್ನು ಸರ್ಕಾರಿ ಸೇವೆಯಲ್ಲಿ ವಿಲೀನಗೊಳಿಸುವ ಸಂಬಂಧದಲ್ಲಿ ಮತ್ತು ಸದರಿ ಸಿಬ್ಬಂದಿಗಳ ಜೇಷ್ಠತೆ ಇನ್ನಿತರ ಸೇವಾ ಸೌಲಭ್ಯಗಳ ಬಗ್ಗೆ ಪ್ರತ್ಯೇಕ ನಿಯಮಗಳನ್ನು ರಚಿಸಲಾಗುವುದು.

ಈ ಆದೇಶವನ್ನು ಕರ್ನಾಟಕ ಸರ್ಕಾರದ (ಕಾರ್ಯ ಕಲಾಪಗಳ ನಿರ್ವಹಣೆ) ನಿಯಮಗಳು 1977ರ 17ನೇ ನಿಯಮದ (02)ನೇ ಉಪ ನಿಯಮದನ್ವಯ ಹೊರಡಿಸಲಾಗಿದೆ.

**ಷರತ್ತುಗಳು**

i. ಶ್ರೀ ಅಂದಾನಪ್ಪ ಜ್ಞಾನಪ್ಪ ದೊಡ್ಡಮೇಟಿ ಪ್ರೌಢಶಾಲೆ, ಜಕ್ಕಲಿ, ರೋಣ ತಾಲ್ಲೂಕು, ಗದಗ ಜಿಲ್ಲೆ ಈ ಪ್ರೌಢಶಾಲೆಗೆ ಸೇರಿದ ಎಲ್ಲಾ ಚರ ಮತ್ತು ಸ್ಥಿರ ಆಸ್ತಿಗಳ ಮಾಲೀಕತ್ವವನ್ನು ಕರ್ನಾಟಕ ಸರ್ಕಾರದ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಗೆ ಮುಫತ್ತಾಗಿ ಒಪ್ಪಿಸತಕ್ಕದ್ದು.

ii. ಸದರಿ ಶಾಲೆಯನ್ನು ಸರ್ಕಾರವು ವಹಿಸಿಕೊಂಡ ನಂತರ ಸದರಿ ಶಾಲೆಯ ಸಿಬ್ಬಂದಿಯು ಸರ್ಕಾರವು ವಿಧಿಸಲಾಗುವ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮಾವಳಿಗಳ ಮತ್ತು ಇತರೆ ನಿಯಮ ಮತ್ತು ನಿಬಂಧನೆಯನ್ನು ಪಾಲಿಸತಕ್ಕದ್ದು.

iii. ಅನುದಾನಿತ ಸಿಬ್ಬಂದಿಯನ್ನು ಹೊರತುಪಡಿಸಿ ಬೇರೆ ಅರೆಕಾಲಿಕ ಅಥವಾ ತಾತ್ಕಾಲಿಕ ಹೆಚ್ಚುವರಿ ಅಥವಾ ದಿನಗೂಲಿ ನೌಕರರು ಇದ್ದಲ್ಲಿ ಅವರನ್ನು ಕೂಡಲೇ ಸೇವೆಯಿಂದ ತೆಗೆದುಹಾಕಲು ಕ್ರಮವಹಿಸತಕ್ಕದ್ದು.

iv. ಹಿಂದಿನ ಆಡಳಿತ ಮಂಡಳಿಯಿಂದ ಯಾವುದೇ ದಾಯಿತ್ವಕ್ಕೆ (liability) ಸರ್ಕಾರವು ಹೊಣೆಯಾಗಲಾರದು. ಸರ್ಕಾರವು ಸದರಿ ಪ್ರೌಢಶಾಲೆಯನ್ನು ತನ್ನ ವಶಕ್ಕೆ ತೆಗೆದುಕೊಂಡ ನಂತರ ಯಾವುದೇ ನ್ಯಾಯಾಲಯದ ತೀರ್ಪಿನ ಹಿನ್ನೆಲೆಯಲ್ಲಿ ಅಥವಾ ಇನ್ನಿತರೆ ಕಾರಣಗಳ ಹಿನ್ನೆಲೆಯಲ್ಲಿ ದಾಯಿತ್ವದ ಬಗ್ಗೆ ಸಮಸ್ಯೆ ಉದ್ಭವವಾದಲ್ಲಿ ಶಾಲೆಯ ಹಿಂದಿನ ಮಂಡಳಿಯೇ ಇದಕ್ಕೆ ಹೊಣೆಯಾಗಿರತಕ್ಕದ್ದು.

v. ಪ್ರೌಢಶಾಲೆಯನ್ನು ಸರ್ಕಾರದ ವಶಕ್ಕೆ ಪಡೆದುಕೊಂಡು ನಂತರ ಶ್ರೀ ಅಂದಾನಪ್ಪ ಜ್ಞಾನಪ್ಪ ದೊಡ್ಡಮೇಟಿ ಪ್ರೌಢಶಾಲೆ, ಜಕ್ಕಲಿ, ರೋಣ ತಾಲ್ಲೂಕು, ಗದಗ ಜಿಲ್ಲೆ ಈ ಪ್ರೌಢಶಾಲೆಯ ಸಮಸ್ತ ಕಟ್ಟಡ ಮತ್ತು ಇನ್ನಿತರ ಎಲ್ಲಾ ಮೂಲಭೂತ ಸೌಕರ್ಯವು ಸರ್ಕಾರದ ಮೂಲ ಮಾಲೀಕತ್ವಕ್ಕೆ ಬರಲಿದ್ದು, ಅವುಗಳನ್ನು ಶೈಕ್ಷಣಿಕ ಉದ್ದೇಶಗಳಿಗಾಗಿಯೇ ಉಪಯೋಗ ಮಾಡಲಾಗುವುದು.

vi. ಸರ್ಕಾರ ವಹಿಸಿಕೊಂಡ ಈ ಸಂಸ್ಥೆಯ ಪ್ರಕರಣವನ್ನು ಇನ್ನಿತರೆ ಯಾವುದೇ ಪ್ರಕರಣಗಳಿಗೆ ಪೂರ್ವನಿದರ್ಶನವೆಂದು ಪರಿಗಣಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಟಿ. ಜಯರಾಂ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಪ್ರೌಢ).

**P.R. 551**

**SC - 50**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಅನಿಲ್‌ಕುಮಾರ್ ಎಸ್. ಭೂಮರೆಡ್ಡಿ, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ, ಇವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(4)/ಶಿಕ್ಷೆ/149/2001–02, ದಿನಾಂಕ 19–9–2001.
2. ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ : ಅಪೀಲು/150/2002–03 (ಓ.ಬಿ. ಸಂಖ್ಯೆ : 110/ 2002–03), ದಿನಾಂಕ 23–10–2002.
3. ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ 27–3–2012
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)/4/2012–13, ದಿನಾಂಕ 18–10–2012
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ : ಪಿಎಸ್‌ಸಿ 192 ಸಿಎನ್‌ಎಸ್ 12, ದಿನಾಂಕ 02–04–2013.

**ಪ್ರಸ್ತಾವನೆ:**

ಶ್ರೀ ಅನಿಲ್‌ಕುಮಾರ್ ಎಸ್. ಭೂಮರೆಡ್ಡಿ, ಪಿ.ಎಸ್.ಐ. ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕೋಟೆ ಪೊಲೀಸ್ ಠಾಣೆ, ಶಿವಮೊಗ್ಗ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ಕರ್ತವ್ಯ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

> "ನೀವು ಕೋಟೆ ಪೊಲೀಸ್ ಠಾಣಾ ಸರಹದ್ದಿನಲ್ಲಿ ಮಟಕಾ ನಿಯಂತ್ರಿಸಲು ವಿಫಲರಾದ ಹಿನ್ನೆಲೆಯಲ್ಲಿ ದಿನಾಂಕ 06–08–2001 ರಂದು ಕೋಟೆ ಪೊಲೀಸ್ ಠಾಣಾ ಸರಹದ್ದಿನಲ್ಲಿ ಮಟಕಾ ಪ್ರಕರಣ ಪತ್ತೆಯಾಗಿದ್ದು, ಈ ರೀತಿ ನೀವು ಕೋಟೆ ಪೊಲೀಸ್ ಠಾಣಾ ಸರಹದ್ದಿನಲ್ಲಿ ಮಟಕಾ ನಿಯಂತ್ರಿಸಲು ಮತ್ತು ನಿಗ್ರಹಿಸಲು ವಿಫಲರಾಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ, ಬೇಜವಾಬ್ದಾರಿ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ : (1) ರಲ್ಲಿ ಓದಲಾದ ದಿನಾಂಕ 19–9–2001 ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡಿದ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ 23–10–2002ರ ಆದೇಶದಲ್ಲಿ ಇವರಿಗೆ "ಛೀಮಾರಿ" ಹಾಕಿ ಇನ್ನು ಮುಂದೆ ಎಚ್ಚರಿಕೆಯಿಂದ ಕರ್ತವ್ಯ ನಿರ್ವಹಿಸುವಂತೆ ತಿಳಿಸಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ "ಛೀಮಾರಿ" ದಂಡನೆಯು ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡುವಳಿ) ನಿಯಮಗಳು 7ರಡಿ ನಮೂದಿಸಿಲ್ಲದ ಕಾರಣ "ಛೀಮಾರಿ" ದಂಡನೆಯನ್ನು "ವಾಗ್ದಂಡನೆ" ಎಂದು ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 78 ಪೊಸಿಅ 2012, ಬೆಂಗಳೂರು, ದಿನಾಂಕ : 24ನೇ ಏಪ್ರಿಲ್ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಅನಿಲ್‌ಕುಮಾರ್ ಎಸ್. ಭೂಮರೆಡ್ಡಿ, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ, ಇವರಿಗೆ ವಿಧಿಸಿದ "ಛೀಮಾರಿ" ದಂಡನೆಯನ್ನು "ವಾಗ್ದಂಡನೆಯನ್ನಾಗಿ" ಮಾರ್ಪಡಿಸಿ, ಈ ದಂಡನೆಯು ದಿನಾಂಕ 19–9–2001 ರಿಂದಲೇ ಜಾರಿಗೆ ಬರುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.
(ಪೊಲೀಸ್ ಸೇವೆಗಳು)

P.R. 552
SC - 30

## ಒಳಾಡಳಿತ ಸಚಿವಾಲಯ

**ವಿಷಯ:** ದಿನಾಂಕ 25–01–2013 ರಂದು ನರಗುಂದ ಪಟ್ಟಣದಲ್ಲಿ ಸಂಭವಿಸಿದ ಗಲಭೆಯಲ್ಲಿ ಗಾಯಗೊಂಡವರಿಗೆ ಪರಿಹಾರ ಧನ ಮಂಜೂರು ಕುರಿತು.

**ಓದಲಾಗಿದೆ:**

1. ಜಿಲ್ಲಾಧಿಕಾರಿಗಳು, ಗದಗ ಜಿಲ್ಲೆ, ಇವರ ಪತ್ರ ಸಂಖ್ಯೆ : ಎಮ್‌ಎಜಿ/ಸಿಆರ್–177/2012–13 ದಿನಾಂಕ 21–03–2013.
2. ಅಪರ ಜಿಲ್ಲಾಧಿಕಾರಿಗಳು, ಗದಗ ಜಿಲ್ಲೆ, ಇವರ ಪತ್ರ ಸಂಖ್ಯೆ : ಎಮ್‌ಎಜಿ/ಸಿಆರ್–177/2012–13, ದಿನಾಂಕ 27–03–2013.
3. ತಹಶೀಲ್ದಾರರು, ತಹಶೀಲ್ದಾರ ಕಾರ್ಯಾಲಯ, ನರಗುಂದ, ಇವರ ಪತ್ರ ಸಂಖ್ಯೆ : ಎಮ್‌ಎಜಿ/ಸಿಆರ್–177/2012–13, ದಿನಾಂಕ 25–02–2012.
4. ಗಾಯಾಳುವಿನ ಸಹೋದರ ಶ್ರೀ ಅಸ್ಲಂಬೇಗ ಹುಸೇನಬೇಗಮುಲ್ಲಾ, ಸಾ: ಪೇಠ ಅವರು ತಹಶೀಲ್ದಾರ, ನರಗುಂದ ಅವರಿಗೆ ಸಲ್ಲಿಸಿದ ಮನವಿ.

**ಪ್ರಸ್ತಾವನೆ:**

ದಿನಾಂಕ 25–01–2013 ರಂದು ನರಗುಂದ ಪಟ್ಟಣದಲ್ಲಿ ಸಂಭವಿಸಿದ ಕೋಮು ಗಲಭೆಯ ಕಾಲಕ್ಕೆ ಇಜಾಜಹ್ಮದ ಹುಸೇನಬೇಗ ಮುಲ್ಲಾ ಸಾ: ಪೇಠ ನರಗುಂದ ಈತನು ಗಂಭೀರವಾಗಿ ಗಾಯಗೊಂಡಿದ್ದು, ಪರಿಹಾರ ಧನವಾಗಿ ರೂ. 4,500/– (ರೂಪಾಯಿ ನಾಲ್ಕು ಸಾವಿರದ ಐದುನೂರು ಮಾತ್ರ) ಅನುದಾನ ಬಿಡುಗಡೆ ಮಾಡಲು ಮೇಲೆ ಓದಲಾದ (1)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಗದಗ ಜಿಲ್ಲೆ ಇವರು ಕೋರಿರುತ್ತಾರೆ. ಜಿಲ್ಲಾಧಿಕಾರಿಗಳು, ಗದಗ ಜಿಲ್ಲೆ ಇವರ ಕೋರಿಕೆಯನ್ನು ಪರಿಗಣಿಸಿ ನರಗುಂದ ಪಟ್ಟಣದಲ್ಲಿ ಸಂಭವಿಸಿದ ಕೋಮು ಗಲಭೆಯಲ್ಲಿ ಗಾಯಗೊಂಡ ಕುಮಾರ ಇಜಾಜಹ್ಮದ ಹುಸೇನಬೇಗ ಮುಲ್ಲಾ ಸಾ: ಪೇಠ ಅಲ್ಪ ವಹಿ ಇರುವುದರಿಂದ ಇವರ ತಂದೆಯಾದ ಹುಸೇನಬೇಗ ರಹೀಮಬೇಗ ಮುಲ್ಲಾ ಸಾ: ಪೇಠ ಇವರಿಗೆ ಪರಿಹಾರ ವಿತರಿಸಲು ಅನುದಾನ ಬಿಡುಗಡೆ ಮಾಡಲು ನಿರ್ಧರಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 07 ಸಿಆರ್‌ಆರ್ 2013, ಬೆಂಗಳೂರು, ದಿನಾಂಕ : 06ನೇ ಮೇ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಗದಗ ಜಿಲ್ಲೆಯ ನರಗುಂದ ಪಟ್ಟಣದಲ್ಲಿ ದಿನಾಂಕ 25–01–2013 ರಂದು ಕೋಮು ಗಲಭೆಯಲ್ಲಿ ಗಾಯಗೊಂಡ ಸಂತ್ರಸ್ಥರಿಗೆ ಪರಿಹಾರ ವಿತರಿಸಲು ರೂ. 4500/– (ರೂಪಾಯಿ ನಾಲ್ಕು ಸಾವಿರದ ಐದುನೂರು ಮಾತ್ರ)ಗಳನ್ನು ಜಿಲ್ಲಾಧಿಕಾರಿಗಳು, ಗದಗ ಜಿಲ್ಲೆ ಇವರಿಗೆ ಸರ್ಕಾರವು ಬಿಡುಗಡೆ ಮಾಡಿದೆ. ಈ ಅನುದಾನವನ್ನು ಲೆಕ್ಕ ಶೀರ್ಷಿಕೆ "2235–60–200–3–01–100" ಧನ ಸಹಾಯ/ಪರಿಹಾರದಡಿಯಲ್ಲಿ 2013–14ನೇ ಸಾಲಿನಲ್ಲಿ ಭರಿಸತಕ್ಕದ್ದು. ಬಟವಾಡೆ ಮಾಡಿದ ನಂತರ **'ಹಣ ಸದ್ಬಳಕೆ'** ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಶೀಘ್ರವಾಗಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಕಾಶ ವೈ.ಕೆ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ.

(ಕಾನೂನು ಮತ್ತು ಸುವ್ಯವಸ್ಥೆ)

**P.R. 553**

**SC - 50**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು